# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 981
ಸದಸ್ಯರ ಹೆಸರು : ಶ್ರೀ ಕೆ.ಟಿ. ಶ್ರೀಕಂಠೇಗೌಡ (ಪದವೀಧರರ ಕ್ಷೇತ್ರ)
ಉತ್ತರಿಸಬೇಕಾದ ದಿನಾಂಕ : 21.12.2021.
ಉತ್ತರಿಸುವವರು : ಪೌರಾಡಳಿತ, ಸಣ್ಣ ಕೈಗಾರಿಕೆ ಹಾಗೂ ಸಾರ್ವಜನಿಕ ಉದ್ಯಮಗಳ ಸಚಿವರು.

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | District Industry Supplying Marketing Society (DISMS) ಎಂದರೇನು; ರಾಜ್ಯದಲ್ಲಿ ಇವು ಎಷ್ಟಿವೆ; ಇವುಗಳನ್ನು ಯಾವಾಗ ಸ್ಥಾಪನೆ ಮಾಡಲಾಗಿದೆ; ಇವುಗಳ ಉದ್ದೇಶಗಳೇನು; (ವಿವರವಾದ ಮಾಹಿತಿ ನೀಡುವುದು) | ಜಿಲ್ಲಾ ಸರಬರಾಜು ಮತ್ತು ಮಾರಾಟ ಸಹಕಾರ ಸಂಘಗಳು ಕರ್ನಾಟಕ ಸರ್ಕಾರದಿಂದ ಮತ್ತು ಕೇಂದ್ರ ಸರ್ಕಾರದಿಂದ ಐ.ಆರ್.ಡಿ.ಪಿ ಕಾರ್ಯಕ್ರಮ ಅಡಿಯಲ್ಲಿ ಪ್ರಾಯೋಜಿತವಾಗಿರುವ ಒಂದು ಅಂಗ ಸಂಸ್ಥೆಯಾಗಿರುತ್ತದೆ. ರಾಜ್ಯದಲ್ಲಿ ಒಟ್ಟು 24 ಸಂಘಗಳಿದ್ದು, ಇವುಗಳು 1991- 1992 ರಲ್ಲಿ ಸ್ಥಾಪನೆಯಾಗಿರುತ್ತದೆ. ಇವುಗಳ ಉದ್ದೇಶವನ್ನು ಅನುಬಂಧ -1 ರಲ್ಲಿ ಲಗತ್ತಿಸಿದೆ. |
| ಆ) | ಈ ಸೊಸೈಟಿಗೆ ಅಧ್ಯಕ್ಷರು, ಕಾರ್ಯದರ್ಶಿ, ಸದಸ್ಯರು ಯಾರು ಯಾರು; ಇವರುಗಳ ಅಧಿಕಾರ ಮತ್ತು ಕರ್ತವ್ಯಗಳೇನು | ಡಿ.ಎಸ್.ಎಂ.ಎಸ್ ನಲ್ಲಿ ನೊಂದಣಿಯಾಗಿರುವ ಸಹಕಾರ ಸಂಘಗಳು ಹಾಗೂ ಕೈಗಾರಿಕಾ ಘಟಕಗಳ ಸದಸ್ಯರಿಂದ ಅಧ್ಯಕ್ಷರು ಚುನಾಯಿತರಾಗಿರುತ್ತಾರೆ.<br>ಕೈಗಾರಿಕಾ ಮತ್ತು ವಾಣಿಜ್ಯ ಇಲಾಖೆಯ ಉಪನಿರ್ದೇಶಕರು (ಖಾಗ್ರಾ) ರವರು ಈ ಸಂಸ್ಥೆಯ ಪದನಿಮಿತ್ತ ವ್ಯವಸ್ಥಾಪಕ ನಿರ್ದೇಶಕರಾಗಿ ಕಾರ್ಯನಿರ್ವಹಿಸುತ್ತಿರುತ್ತಾರೆ.<br>ಸಹಕಾರ ಸಂಘಗಳು ಹಾಗೂ ಕೈಗಾರಿಕಾ ಘಟಕಗಳು ಸಂಘದಲ್ಲಿ ಸದಸ್ಯರಾಗಿರುತ್ತಾರೆ.<br>ಸಂಘದ ಅಧ್ಯಕ್ಷರ ಕರ್ತವ್ಯಗಳು:- ಸಂಘದ ಸಾಮಾನ್ಯ ಆಡಳಿತವು ಅಧ್ಯಕ್ಷರು ಸಾಮಾನ್ಯ ನಿಯಂತ್ರಣಕೊಳಪಟ್ಟಿದ್ದು, ಮಹಾಸಭೆ, ಆಡಳಿತ ಮಂಡಳಿ ಸಭೆಗಳು ಹಾಗೂ ಉಪ ಸಮಿತಿಗಳ ಅಧ್ಯಕ್ಷತೆಯಲ್ಲಿ ವಹಿಸುವುದು ಹಾಗೂ ಅವುಗಳಿಗೆ ಸಹಿ ಮಾಡುವುದು.<br>ವ್ಯವಸ್ಥಾಪಕ ನಿರ್ದೇಶಕರ ಕರ್ತವ್ಯಗಳು:- ಸಂಘದ ಸಾಮಾನ್ಯ ವ್ಯವಹಾರ ನಡೆಸುವುದು, ದೈನ್ಯಂದಿನ ನಿರ್ವಹಣೆ ಮತ್ತು ವ್ಯವಹಾರದ ಮೇಲಿನ ಸಾಮಾನ್ಯ ನಿರ್ವಹಣೆ, ನೌಕರರ ಮೇಲ್ವಿಚಾರಣೆ, ದಾಖಲೆ ಮತ್ತು ದಸ್ತಾವೇಜುಗಳ ಸುರಕ್ಷತೆ, ಸಂಘದ ಭದ್ರತಾ ಪತ್ರಗಳ ಅಭಿರಕ್ಷೆ, ಮಹಾಸಭೆ, ಆಡಳಿತ ಮಂಡಳಿ ಸಭೆಗಳು ಹಾಗೂ ಉಪಸಮಿತಿಗಳ ಸಭಾ ನಡವಳಿಗಳಿಗೆ ಸಹಿ ಮಾಡುವುದು. ಲೆಕ್ಕಪರಿಶೋಧನಾ ವರದಿಗೆ ಪರಿವೀಕ್ಷಣಾ ವರದಿ ಸಲ್ಲಿಸುವುದು, ಸಿಬ್ಬಂದಿ ವರ್ಗದವರಿಗೆ ರಜಾ ಮಂಜೂರಾತಿ ಹಾಗೂ ವೇತನ ಪಾವತಿ ಮಾಡುವುದು, ಸದಸ್ಯತ್ವಕ್ಕಾಗಿ ಬಂದ ಅರ್ಜಿಗಳನ್ನು ಸ್ವೀಕರಿಸಿ ಸಭೆಯಲ್ಲಿ ಮಂಡಿಸುವುದು ಹಾಗೂ ಇತರೇ ಕಾರ್ಯಗಳು. |

| | | |
|---|---|---|
| ಇ) | ಬೆಂಗಳೂರು, ತುಮಕೂರು, ಕೋಲಾರ ಮತ್ತು ಮೈಸೂರು ಜಿಲ್ಲೆಗಳಲ್ಲಿರುವ ಸದರಿ ಸೋಸೈಟಿಯು ಕಳೆದ 5 ವರ್ಷಗಳಿಂದ ನಡೆಸಿರುವ ವ್ಯವಹಾರಗಳೇನು; ಇದರಿಂದ ಬಂದ ಲಾಭವೆಷ್ಟು ಮತ್ತು ನಷ್ಟವೆಷ್ಟು; (ವಿವರವಾದ ಮಾಹಿತಿ ನೀಡುವುದು) | **ಅನುಬಂಧ – 2** ರಲ್ಲಿ ಲಗತ್ತಿಸಿದೆ. |
| ಈ) | ಕೋಲಾರ ಜಿಲ್ಲೆಯ DISMS ಸೊಸೈಟಿಯು ಬೆಂಗಳೂರು ಉತ್ತರ ವಿಶ್ವವಿದ್ಯಾಲಯಕ್ಕೆ ಎಷ್ಟು ಮೊತ್ತದ ಸಾಮಗ್ರಿಗಳನ್ನು ಸರಬರಾಜು ಮಾಡಲಾಗಿದೆ; (ಬಿಲ್ಲುಗಳ ಸಮೇತ ವಿವರವಾದ ಮಾಹಿತಿ ನೀಡುವುದು) | ಕೋಲಾರ ಜಿಲ್ಲೆಯ ಸಂಘದಿಂದ ಬೆಂಗಳೂರು ಉತ್ತರ ವಿಶ್ವವಿದ್ಯಾಲಯಕ್ಕೆ ಸಾಮಗ್ರಿಗಳನ್ನು ಸರಬರಾಜು ಮಾಡಿರುವುದಿಲ್ಲ. |
| ಉ) | ಈ ಸೊಸೈಟಿಗಳ ಬಲವರ್ಧನೆ ಮತ್ತು ಪುನಶ್ಚೇತನಕ್ಕೆ ಸರ್ಕಾರ ನೀಡಿರುವ ಅನುದಾನ ಹಾಗೂ ಕಾರ್ಯಕ್ರಮಗಳಾವುವು? | ಪ್ರತಿ ಸಂಘಕ್ಕೆ ರೂ.5.00 ಲಕ್ಷದಿಂದ ರಿಂದ ರೂ.10.00 ಲಕ್ಷದವರೆಗೆ ಶೇರು ಬಂಡವಾಳ ಸರ್ಕಾರದಿಂದ ನೀಡಲಾಗಿದೆ. ಈ ಸೊಸೈಟಿಗಳ ಬಲವರ್ಧನೆ ಮತ್ತು ಪುನಶ್ಚೇತನಕ್ಕಾಗಿ ಇಲಾಖೆಯಿಂದ ಯಾವುದೇ ಅನುದಾನ ನೀಡಿರುವುದಿಲ್ಲ. |

ಸಿಐ 222 ಸಿಎಸ್‌ಸಿ 2021

(ಎನ್. ನಾಗರಾಜು (ಎಂ.ಟಿ.ಬಿ))
ಪೌರಾಡಳಿತ ಮತ್ತು ಸಣ್ಣ ಕೈಗಾರಿಕೆ
ಹಾಗೂ ಸಾರ್ವಜನಿಕ ಉದ್ದಿಮೆಗಳ ಸಚಿವರು.

ಅನುಬಂಧ – 1

## ಜಿಲ್ಲಾ ಸರಬರಾಜು ಮತ್ತು ಮಾರಾಟ ಸಹಕಾರ ಸಂಘದ ಉದ್ದೇಶಗಳು:

1) ಸಂಘದ ಕಾರ್ಯವ್ಯಾಪ್ತಿಯಲ್ಲಿ ವಾಸಿಸುವ ಕುಶಲಕರ್ಮಿಗಳಿಗೆ, ಗುಡಿ ಕೈಗಾರಿಕೆಗಳ ವರಿಗೆ, ಸಣ್ಣ ಕೈಗಾರಿಕೋದ್ಯಮಿಗಳಿಗೆ ಬೇಕಾಗುವ ಕಚ್ಚಾ ವಸ್ತುಗಳನ್ನು ತಯಾರಿಕರಿಂದ/ಡೀಲರ್‌ಗಳಿಂದ ಖರೀದಿಸಿ ಸರಬರಾಜು ಮಾಡುವುದು.

2) ಸಂಘದ ಸದಸ್ಯರು, ಗುಡಿ ಕೈಗಾರಿಕೆಗಳವರು, ಸಣ್ಣ ಕೈಗಾರಿಕೋದ್ಯಮಿಗಳು ತಯಾರಿಸಿದ ಸಿದ್ದ ವಸ್ತುಗಳನ್ನು ಸಂಘದ ಕಾರ್ಯವ್ಯಾಪ್ತಿಯಲ್ಲಿ ಮತ್ತು ವ್ಯಾಪ್ತಿಯ ಹೊರಗಡೆ ಪ್ರದರ್ಶನ ಮಾಡುವ ಮತ್ತು ಮಾರಾಟ ಮಾಡುವ ವ್ಯವಸ್ಥೆ ಮಾಡುವುದು.

3) ಹೊಸ ಹೊಸ ವಿನ್ಯಾಸಗಳನ್ನು ಅಭಿವೃದ್ಧಿಪಡಿಸಿ ಅದನ್ನು ಸಂಘದ ಕುಶಲಕರ್ಮಿಗಳಿಗೆ ಒದಗಿಸುವುದು. ಗ್ರಾಮೀಣ ಗುಡಿಕೈಗಾರಿಕೆ ಸಣ್ಣ ಕೈಗಾರಿಕೆಗಳಲ್ಲಿ ತಯಾರಾಗುವ ವಸ್ತುಗಳ ಗುಣಮಟ್ಟವನ್ನು ಉತ್ತಮಪಡಿಸಲು ಕಾರ್ಯವನ್ನು ಕೈಗೊಳ್ಳುವುದಲ್ಲದೆ ಭಾರತೀಯ ಗುಣಮಟ್ಟ ಸಂಸ್ಥೆ (ಐ.ಎಸ್.ಐ) ನಿಯಮಾನುಸಾರ ವಸ್ತುಗಳನ್ನು ತಯಾರಿಸಲು ಸಜ್ಜುಗೊಳಿಸುವುದು.

4) ಜಿಲ್ಲಾ ಕೈಗಾರಿಕಾ ಕೇಂದ್ರದ ಮೂಲಕ ಕುಶಲಕರ್ಮಿಗಳಿಗೆ ದೊರೆಯುವ ಸವಲತ್ತುಗಳನ್ನು ಒದಗಿಸಿಕೊಡುವುದು. ಜಿಲ್ಲಾ ಕೈಗಾರಿಕಾ ಕೇಂದ್ರದ ಯೋಜನೆಗಳನ್ನು ಸಂಘದ ಮೂಲಕ ಅನುಷ್ಠಾನಗೊಳಿಸುವುದು. ಕುಶಲಕರ್ಮಿಗಳಿಗೆ ತರಬೇತಿ ಕಾರ್ಯಕ್ರಮಗಳನ್ನು ಏರ್ಪಾಟು ಮಾಡುವುದು. ಹಾಗೂ ಅವಶ್ಯವಿರುವ ಕಡೆ ಮಾರಾಟ ಮಳಿಗೆಗಳನ್ನು ತೆರೆಯುವುದು.

5) ಸಂಘದ ಕಾರ್ಯವ್ಯಾಪ್ತಿಯಲ್ಲಿರುವ ಹಾಗೂ ವ್ಯಾಪ್ತಿಯ ಹೊರಗಿರುವ ಸರ್ಕಾರಿ ಮತ್ತು ಅರೆ ಸರ್ಕಾರಿ ಕಛೇರಿಗಳು, ಸಹಕಾರಿ ಸಂಸ್ಥೆಗಳು, ಸಾರ್ವಜನಿಕ ಸಂಸ್ಥೆಗಳು, ಕೈಗಾರಿಕಾ ಸಂಸ್ಥೆಗಳು ಹಾಗೂ ಬ್ಯಾಂಕುಗಳು ಸಾರಿಗೆ, ರೈಲ್ವೆ, ಮುಂತಾದ ಸಂಸ್ಥೆ/ ಇಲಾಖೆಗಳಿಗೆ ಅಗತ್ಯವಿರುವ ವಸ್ತುಗಳನ್ನು ಸಂಘವು ನೇರವಾಗಿ ಹಾಗೂ ಟೆಂಡರ್ ಪಡೆದುಕೊಂಡು ಸರಬರಾಜು ಮಾಡಬಹುದು.

6) ಸರ್ಕಾರಿ ಇಲಾಖೆಗಳಿಗೆ ಬೇಕಾಗುವ ವಸ್ತುಗಳನ್ನು ಸಂಘದ ಸದಸ್ಯರಿಂದ ಮತ್ತು ಕುಶಲ ಕರ್ಮಿಗಳಿಂದ ತಯಾರು ಮಾಡಿಸಿ ದರ ನಿಷ್ಕರ್ಷೆ ಮಾಡಿ ಸರಬರಾಜು ಮಾಡುವುದು.

7) ರಾಷ್ಟ್ರ/ರಾಜ್ಯಮಟ್ಟದ ರಾಜ್ಯಗಳ ವಿವಿಧ ಕೈಗಾರಿಕಾಭಿವೃದ್ಧಿಯಲ್ಲಿ ನಿರತರಾಗಿರುವ ಸಂಸ್ಥೆಗಳ ನಿಕಟ ಸಂಪರ್ಕ ಹೊಂದಿ ಸಂಘದ ಸದಸ್ಯರಿಗೆ ಸರ್ಕಾರಿ ಸಂಸ್ಥೆಗಳ ಮೂಲಕ ದೊರೆಯುವ ಸವಲತ್ತುಗಳನ್ನು ಒದಗಿಸಿಕೊಡುವುದು.

ಅನುಬಂಧ – 2

ರೂ.ಲಕ್ಷಗಳಲ್ಲಿ

| ಕ್ರ.ಸಂ | ಜಿಲ್ಲೆ ಹೆಸರು | 2016-2017 | | | 2017-2018 | | | 2018-2019 | | | 2019-2020 | | | 2020-2021 | | |
|---|---|---|---|---|---|---|---|---|---|---|---|---|---|---|---|---|
| | | ವಾರ್ಷಿಕ ವಹಿವಾಟು | ನಿವ್ವಳ ಲಾಭ | ನಷ್ಟ | ವಾರ್ಷಿಕ ವಹಿವಾಟು | ನಿವ್ವಳ ಲಾಭ | ನಷ್ಟ | ವಾರ್ಷಿಕ ವಹಿವಾಟು | ನಿವ್ವಳ ಲಾಭ | ನಷ್ಟ | ವಾರ್ಷಿಕ ವಹಿವಾಟು | ನಿವ್ವಳ ಲಾಭ | ನಷ್ಟ | ವಾರ್ಷಿಕ ವಹಿವಾಟು | ನಿವ್ವಳ ಲಾಭ | ನಷ್ಟ |
| 1 | ಬೆಂಗಳೂರು (ನ) | 6010.44 | 46.53 | - | 4803.7 | 34.49 | - | 2875.07 | 0.21 | - | 4099.14 | 34.26 | - | 3482.79 | 6.25 | - |
| 2 | ತುಮಕೂರು | 4.57 | 1.41 | - | 11.00 | 1.2 | - | 8.76 | 1.08 | - | 11.64 | 1.66 | - | 0.16 | 0.4 | - |
| 3 | ಕೋಲಾರ | 58.67 | 2.72 | - | 72.3 | 3.19 | | 81.17 | 1.1 | | 57.29 | 0.2 | - | - | - | - |
| 4 | ಮೈಸೂರು | 182.97 | 1.33 | - | 362.44 | 0.85 | - | 240.4 | 0.18 | - | 233.6 | - | 2.74 | 270.32 | 0.60 | - |